ನವಸಾಕ್ಷರ ಪುಸ್ತಕ ಮಾಲೆ ೨೦

# ವಿವಾಹ ಕಾನೂನು

ಗೀತಾ ಕೃಷ್ಣಮೂರ್ತಿ





ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ - ೭೦

# ವಿವಾಹ ಕಾನೂನು

ಗೀತಾ ಕೃಷ್ಣಮೂರ್ತಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೭೭

VIVAHA KANOONU : By Geeta Krishnamurthy. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---





**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ



**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು – ೫೬೦ ೦೦೪.




# ವಿವಾಹ ಕಾನೂನು

ಸಮಾಜದ ಸುವ್ಯವಸ್ಥೆಗೆ ಕಾನೂನು ಅತ್ಯಗತ್ಯ. ತಾನಿರುವ ನಾಡಿನ ಕಾನೂನು ಏನಿದೆ ಎಂಬುದನ್ನು ಪ್ರತಿಯೊಬ್ಬ ಪ್ರಜೆಯೂ ತಿಳಿದಿರಬೇಕು. ಮಾಡಿದ ತಪ್ಪಿಗೆ ಪ್ರತಿಯೊಬ್ಬನೂ ಶಿಕ್ಷೆ ಅನುಭವಿಸಲೇಬೇಕು. 'ಅದು ತಪ್ಪೆಂದು ತಿಳಿದಿರಲಿಲ್ಲ' ಎಂಬ ಮಾತು ಅದಕ್ಕೆ ಉತ್ತರವಾಗಲಾರದು. ಅಲ್ಲದೆ ಅಂಥ ಉತ್ತರವನ್ನು ನ್ಯಾಯಾಲಯ ಒಪ್ಪುವುದೂ ಇಲ್ಲ. ಆದ್ದರಿಂದ ವಿವಾಹ, ವಿಚ್ಛೇದನ, ಜೀವನಾಂಶ ಮೊದಲಾದ ವಿಷಯಗಳಲ್ಲಿ ಕಾನೂನಿನ ಪ್ರಾಥಮಿಕ ಮಾಹಿತಿಯನ್ನಾದರೂ ಹೊಂದಿರುವುದು ಅಗತ್ಯ. ವಿವಾಹ ವಿಚ್ಛೇದನ, ಜೀವನಾಂಶಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಧರ್ಮೀಯರಿಗೆ ಬೇರೆ ಬೇರೆ ಕಾನೂನುಗಳಿವೆ. ಅವುಗಳನ್ನು 'ವೈಯಕ್ತಿಕ ಕಾನೂನು' ಎನ್ನುತ್ತಾರೆ.

## ವಿವಾಹ ಸಂಬಂಧೀ ಕಾನೂನು

ರಾಜಣ್ಣ ಪಾರ್ವತಿ ಅಕ್ಕಪಕ್ಕದ ಮನೆಯವರು. ಇಬ್ಬರಿಗೂ ಮದುವೆಯಾಗಿ ಒಂದಾಗಿ ಬಾಳುವಾಸೆ. ಆದರೆ ಹಿರಿಯರಿಗೆ ಇದು ಇಷ್ಟವಿಲ್ಲ. ಹೀಗಾಗಿ ಇಬ್ಬರೂ ಒಂದು ದೇವಾಲಯಕ್ಕೆ ಹೋದರು. ರಾಜಣ್ಣ ಪಾರ್ವತಿಗೆ ಹಾರ ಹಾಕಿದ, ಪಾರ್ವತಿ ರಾಜಣ್ಣನಿಗೆ ಹಾರ ಹಾಕಿದಳು. ರಾಜಣ್ಣ ಪಾರ್ವತಿಯ ಹಣೆಗೆ ಕುಂಕುಮ ಹಚ್ಚಿದ. ಈಗ ಅವಳು ತನ್ನ ಪತ್ನಿಯೆಂದು ತಿಳಿಸಿದ.

■ ಆದರೆ ಈ ರೀತಿಯ ಮದುವೆ ಮದುವೆಯೇ ಅಲ್ಲ. ಮದುವೆಯನ್ನು ಹುಡುಗನ ಅಥವಾ ಹುಡುಗಿಯ ಮನೆಯ ಪದ್ಧತಿಯಂತೆ ಆಚರಿಸಬೇಕು.



**ಹಾರಗಳ ವಿನಿಮಯ ಕಾನೂನು ಸಮ್ಮತ ವಿವಾಹವಲ್ಲ**

ಅತಿ ಹಿಂದಿನಿಂದ ಬಂದ ಪದ್ಧತಿಗಳನ್ನು ಮಾತ್ರ ಕಾನೂನು ಒಪ್ಪಿಕೊಂಡಿದೆ. ಹುಡುಗನದು ಬೇರೆ ಪದ್ಧತಿ, ಹುಡುಗಿಯದು ಬೇರೆ ಪದ್ಧತಿಯಾಗಿದ್ದರೆ, ಯಾರ ಪದ್ಧತಿಯನ್ನು ಬೇಕಾದರೂ ಅನುಸರಿಸಬಹುದು. ಉದಾಹರಣೆಗೆ - ಹೋಮ, ಸಪ್ತಪದಿ ಮುಂತಾದವು.

■ ವಿವಾಹದ ರುಜುವಾತಿಗಾಗಿ ಮದುವೆಯನ್ನು ಹಿಂದೂ ವಿವಾಹ ರಿಜಿಸ್ಟರಿನಲ್ಲಿ ನಮೂದಿಸಬಹುದು. ಇದು ಕಡ್ಡಾಯವಲ್ಲ.

ಆದ್ದರಿಂದ ಪಾರ್ವತಿ ರಾಜಣ್ಣನ ಪತ್ನಿಯೇ ಅಲ್ಲ. ಕಾನೂನು ಇಂಥ ಮದುವೆಯನ್ನು ಮದುವೆಯೆಂದೇ ಪರಿಗಣಿಸುವುದಿಲ್ಲ.

ಹಿಂದೂ ವಿವಾಹ ಕಾನೂನಿನ ಅಡಿಯಲ್ಲಿ ವಿವಾಹವಾಗುವ ಹುಡುಗ, ಹುಡುಗಿ ಇಬ್ಬರೂ ಹಿಂದೂಗಳಾಗಿರಬೇಕು.

- ಹಿಂದೂಗಳಲ್ಲೇ ಬೇರೆ ಬೇರೆ ಜಾತಿಗಳಿಗೆ ಸೇರಿದವರು ಪರಸ್ಪರ ಮದುವೆಯಾಗಬಹುದು.

ಗಂಗೆ ಹಳ್ಳಿಯ ಹುಡುಗಿ. ಇಪ್ಪತ್ತಾರು ವರ್ಷದ ಗಂಗೆಗೆ ಮದುವೆಯಾಗಿಲ್ಲ ಎಂದು ಅವಳ ತಂದೆತಾಯಿಯರ ಚಿಂತೆ. ಪಕ್ಕದ ಹಳ್ಳಿಯ ಗಿರಿಯನಿಗೆ ಮೂವತ್ತೈದು ವರ್ಷ. ಮಕ್ಕಳಿರಲಿಲ್ಲ. ಅವನ ಹೆಂಡತಿ ಗೌರಿ ಇನ್ನೊಂದು ಮದುವೆಯಾಗುವಂತೆ ಗಂಡನನ್ನು ಕಾಡುತ್ತಿದ್ದಳು. ಈ ವಿಷಯ ಗಂಗೆಯ ತಂದೆತಾಯಿಯರಿಗೆ ತಿಳಿಯಿತು. ಗಂಗೆಯ ಮದುವೆ ಗಿರಿಯನೊಂದಿಗೆ ನಡೆದುಹೋಯಿತು. ಗಂಗೆಗೆ ಮಗುವಾಯಿತು. ಆನಂತರ ಗೌರಿಗೂ ಒಂದು ಮಗುವಾಯಿತು. ಈಗ ಗಂಗೆಯ ಬಾಳು ಆ ಮನೆಯಲ್ಲಿ ನರಕವಾಯಿತು. ಅಲ್ಲಿರಲಾರದೆ ಮಗುವನ್ನು ಕರೆದುಕೊಂಡು ಗಂಗೆ ತೌರಿಗೆ ಬಂದುಬಿಟ್ಟಳು. ಗಂಗೆಗೆ ಈಗ ಗಿರಿಯನ ಆಸ್ತಿಯ ಮೇಲೆ ಕಣ್ಣು.

- ಹಿಂದೂ ಧರ್ಮಕ್ಕೆ ಸೇರಿದ ಯಾವ ಪುರುಷನೂ ಎರಡನೇ ಮದುವೆ ಮಾಡಿಕೊಳ್ಳುವಂತಿಲ್ಲ. ಅದು ಅಪರಾಧ.

- ಗಂಗೆಗೆ ಗಿರಿಯನ ಆಸ್ತಿಯ ಮೇಲೆ ಯಾವ ಹಕ್ಕೂ ಇರುವುದಿಲ್ಲ.

- ಗಂಗೆ-ಗಿರಿಯನ ಮಗುವನ್ನು ಕಾನೂನು ಸಮ್ಮತ ಮಗುವೆಂದೇ ಪರಿಗಣಿಸಲಾಗುತ್ತದೆ. ಅವನಿಗೆ ಎಲ್ಲ ಹಕ್ಕುಗಳೂ ಇರುತ್ತದೆ.

ರಾಧ ಮತ್ತು ಸೋಮುವಿನ ಮದುವೆಯಾದಾಗ ಎಲ್ಲರಿಗೂ ಸಂತೋಷವಾಗಿತ್ತು. ಆದರೆ ಆ ಸಂತೋಷ ಹೆಚ್ಚು ದಿನ ಇರಲಿಲ್ಲ. ಸೋಮುವಿಗೆ ತಲೆ ಸರಿಯಿಲ್ಲ. ಆತ ಹುಚ್ಚ ಎಂಬ ವಿಷಯ ಮದುವೆಯಾದ ಮೇಲೆ ತಿಳಿಯಿತು. ಸೋಮುವಿನ

ಮನೆಯವರು ಈ ವಿಷಯವನ್ನು ಮುಚ್ಚಿಟ್ಟಿದ್ದರು. ಮದುವೆಯಾದ ಒಂದೆರಡು ದಿನಗಳ ನಂತರ ರಾಧ ತೌರಿಗೆ ವಾಪಸ್ಸಾದಳು. ರಾಧಳ ತಂದೆತಾಯಿಯರ ಗೋಳು ಹೇಳತೀರದು.

- ಮದುವೆಯಾಗುವಾಗಲೇ ಸೋಮು ಮನೋವಿಕಲನಾಗಿದ್ದ. ಆದ್ದರಿಂದ ನಿಜವಾದ ಮದುವೆ ನಡೆದೇ ಇಲ್ಲ. ರಾಧ ಮತ್ತೊಮ್ಮೆ ಹೊಸ ಜೀವನ ಪ್ರಾರಂಭಿಸಬಹುದು.

- ಮದುವೆಯ ಸಮಯದಲ್ಲಿ ಹುಡುಗ ಮನೋವಿಕಲನಾಗಿರಬಾರದು.

- ಆಗಿಂದಾಗ್ಗೆ ಮೂರ್ಛೆರೋಗ ಬರುತ್ತಿರುವವನಾಗಬಾರದು.

ಸೀತ ತನ್ನ ಮಗಳನ್ನು ತನ್ನ ತಮ್ಮನಿಗೇ ಕೊಟ್ಟು ಮದುವೆ ಮಾಡಿದಳು. ಅವಳಿಗೆ ತೌರಿನ ಸಂಬಂಧ ಉಳಿಯಿತೆಂದು ಸಂತೋಷ. ಇಂಥ ಮದುವೆ ರೂಢಿಯಲ್ಲಿ ಇದ್ದರೆ ಮಾತ್ರ ಇದಕ್ಕೆ ಕಾನೂನಿನ ಒಪ್ಪಿಗೆ.

- ಪದ್ಧತಿಯಲ್ಲಿಲ್ಲದಿದ್ದರೆ ಸೋದರ ಬಾಂಧವ್ಯವಿರುವ ಹತ್ತಿರದ ಸಂಬಂಧಿಗಳ ನಡುವೆ ವಿವಾಹಕ್ಕೆ ಅನುಮತಿಯಿಲ್ಲ.

***

- ಹುಡುಗ ನಪುಂಸಕನೆಂಬ ಕಾರಣದಿಂದ ಗಂಡು ಹೆಣ್ಣು ಒಂದಾಗದಿದ್ದರೆ.

- ಮದುವೆಯ ಸಮಯದಲ್ಲಿ ಹುಡುಗಿ ಬೇರೊಬ್ಬನಿಂದ ಗರ್ಭಿಣಿಯಾಗಿರುವ ವಿಷಯ ತಿಳಿಯದೆ ಮದುವೆಯಾಗಿದ್ದರೆ.

ಅಂಥ ವಿವಾಹವನ್ನು ನ್ಯಾಯಾಲಯ ರದ್ದುಪಡಿಸುತ್ತದೆ. ಆದರೆ ಅಂಥ ವಿವಾಹದ ತರುವಾಯ ಒಂದು ವರ್ಷದೊಳಗೆ ಅರ್ಜಿ ಸಲ್ಲಿಸಬೇಕು.

ಗಿರೀಶನ ಅಣ್ಣ ಸುರೇಶ. ಸುರೇಶ ಮದುವೆಯಾದ ಒಂದು ವರ್ಷದಲ್ಲೇ ಲಾರಿಗೆ ಸಿಕ್ಕು ಸತ್ತುಹೋದ. ಸುರೇಶನ ಹೆಂಡತಿ ಮಾಲಾಗೆ ಇನ್ನೂ ಚಿಕ್ಕ ವಯಸ್ಸು. ಜೀವನ ಪೂರ್ತಿ ಅವಳು ವಿಧವೆಯಾಗೇ ಕಾಲ ಕಳೆಯಬೇಕಿಲ್ಲ. ಅವಳು ಮತ್ತೆ ವಿವಾಹವಾಗಬಹುದು.

■ ವಿಧವೆ ಎಲ್ಲರಂತೆಯೇ ಮತ್ತೆ ಮದುವೆಯಾಗಬಹುದು.

ಗಿರೀಶ ಮಾಲಾಳಿಗೆ ಬಾಳು ಕೊಡಲು ತೀರ್ಮಾನಿಸಿದ. ಮಾಲಾಳನ್ನು ತಾನು ಮದುವೆಯಾಗುತ್ತೇನೆಂದ. ಅವನ ತಂದೆತಾಯಿಯರು ಬೇಡವೆಂದರು. ಕೆಲವು ಕೋಮುಗಳಲ್ಲಿ ಅತ್ತಿಗೆ ತಾಯಿಯ ಸಮಾನ. ಗಿರೀಶ ಮಾಲಾಳನ್ನು ಮದುವೆಯಾಗುವಂತಿಲ್ಲ. ಆದರೆ ಮತ್ತೆ ಕೆಲವರಲ್ಲಿ ತಮ್ಮ - ಅಣ್ಣನ ವಿಧವೆ ಹೆಂಡತಿಯನ್ನು ಮದುವೆಯಾಗಬಹುದು.

■ ನಿಮ್ಮ ನಿಮ್ಮ ಪದ್ಧತಿಯಲ್ಲಿ ರೂಢಿಯಲ್ಲಿದ್ದರೆ ಮಾತ್ರ ಹತ್ತಿರದ ಸಂಬಂಧಿಗಳನ್ನು ಮದುವೆಯಾಗಬಹುದು. ಇಲ್ಲದಿದ್ದರೆ ಅದು ಕಾನೂನು ಸಮ್ಮತ ಮದುವೆಯಾಗುವುದಿಲ್ಲ.

## ಗಂಡ-ಹೆಂಡತಿಯರು ಹೊಂದಿಕೊಂಡು ಬಾಳದಿದ್ದರೆ ಮೂರು ಬಗೆಯ ಪರಿಹಾರಗಳು ಇವೆ.

ಮಾಧವನಿಗೆ ಗಿರಿಜೆಯನ್ನು ಮದುವೆಯಾಗುವ ಮನಸ್ಸು ಇರಲಿಲ್ಲ. ಹಿರಿಯರ ಬಲವಂತಕ್ಕೆ ಮದುವೆಯಾದ. ಹೀಗಾಗಿ ಮದುವೆಯಾಗಿದ್ದರೂ ಮನೆಗೆ ಬರುತ್ತಿರಲಿಲ್ಲ. ಮನೆ ನಡೆಸಲು ಹಣವನ್ನೂ ಕೊಡುತ್ತಿರಲಿಲ್ಲ. ಗಿರಿಜೆ ತುಂಬ ನೊಂದಳು. ಓದು ಬರಹ ತಿಳಿದ ಗಿರಿಜೆ ವಕೀಲರ ಬಳಿಗೆ ಹೋದಳು. ಅವರ ಸಲಹೆಯಂತೆ ನ್ಯಾಯಾಲಯದ ಕಟ್ಟೆ ಹತ್ತಿದಳು. ಇವಳ ಕಥೆ ಕೇಳಿದ ನ್ಯಾಯಾಧೀಶರು ಮದುವೆಯಾದ ನಂತರ ಕಾರಣವಿಲ್ಲದೆ ಗಂಡ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳುವಂತಿಲ್ಲ. ಹೆಂಡತಿಯನ್ನು ಬಾಳಿಸಬೇಕು - ಎಂದು ಹೇಳಿ ಅವಳ ಜೊತೆಯಲ್ಲಿ ಸಂಸಾರ ನಡೆಸುವಂತೆ ಮಾಧವನಿಗೆ ಆದೇಶ ನೀಡಿದರು.



ಕೂಡಿ ಬಾಳಿದರೆ ಸ್ವರ್ಗಸುಖ. ಇಲ್ಲದಿರೆ ........

**ಯಾವುದೇ ಬಲವಾದ ಕಾರಣವಿಲ್ಲದೆ ಗಂಡ ತನ್ನ ಸಂಸಾರದ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವಂತಿಲ್ಲ. ಹಾಗೆ ಮಾಡಿದಾಗ ಗಂಡ-ಹೆಂಡತಿ ಒಟ್ಟಿಗೆ ಬಾಳುವಂತೆ ನ್ಯಾಯಾಲಯ ಆದೇಶಿಸುತ್ತದೆ.**

ಶೀಲಾ ಓದುಬರಹ ತಿಳಿದ ಹುಡುಗಿ. ಒಳ್ಳೆಯ ಹುಡುಗಿ. ತುಂಬ ಸುಂದರಿ. ಅವಳ ರೂಪವನ್ನು ನೋಡಿಯೇ ಮುರಳಿ ಅವಳನ್ನು ಮದುವೆಯಾದ. ಆದರೆ ಸದಾಕಾಲ ಅವಳ ಮೇಲೆ ಅವನಿಗೆ ಅನುಮಾನ. ಅವಳು ನಗುನಗುತ್ತಿದ್ದರೆ ಬೇರೆಯವರಿಗಾಗಿಯೇ ಅವಳು ನಗುತ್ತಾಳೆ ಎಂದು ತಿಳಿಯುತ್ತಿದ್ದ. ಇದ್ದಕ್ಕಿದ್ದಂತೆ ಆಫೀಸಿನಿಂದ ಮನೆಗೆ ಬರುತ್ತಿದ್ದ. ಯಾರು ಬಂದಿದ್ದರು, ಯಾರೊಡನೆ ಲಲ್ಲೆ ಹೊಡೆಯುತ್ತಿದ್ದೆ ಎಂದೆಲ್ಲ ಕೀಳಾಗಿ ಮಾತನಾಡುತ್ತಿದ್ದ. ಬೇರೆಯವರ ಎದುರಿನಲ್ಲೇ ಅವಳ ನಡತೆಯನ್ನು ಅನುಮಾನಿಸಿ ಮಾತನಾಡುತ್ತಿದ್ದ. ರೋಸಿಹೋದ ಶೀಲಾ ಗಂಡನಿಂದ ಬೇರೆ ಇರಲು ಬಯಸಿದಳು. ಬೇರೆ ಬೇರೆ ಇರಲು ಅನುಮತಿ ನೀಡಬೇಕೆಂದು ನ್ಯಾಯಾಲಯಕ್ಕೆ ಅರ್ಜಿ ಹಾಕಿದಳು.

ಇದಕ್ಕೆ ಅವಳು ನೀಡಿದ ಕಾರಣ - ಗಂಡನ ಹಿಂಸೆ. ಗಂಡನಿಂದ ಬೇರೆಯಾಗಿ ವಾಸಿಸಲು ನ್ಯಾಯಾಲಯ ಅವಳಿಗೆ ಅನುಮತಿ ನೀಡಿತು.

- ಹಿಂಸೆ ಎಂದರೆ ದೈಹಿಕ ಹಿಂಸೆ- ಹೊಡೆಯುವುದು- ಎಂದಷ್ಟೇ ಅರ್ಥವಲ್ಲ. ಮನಸ್ಸಿಗೆ ಮಾಡುವ ಹಿಂಸೆಯೂ ಹಿಂಸೆಯೇ.

ಬೇರೆ ಬೇರೆ ಕಾರಣಗಳಿಗಾಗಿಯೂ ಗಂಡಹೆಂಡತಿ ಬೇರೆ ಬೇರೆ ವಾಸಿಸಲು ಬಯಸಿ ನ್ಯಾಯಾಲಯದ ಅನುಮತಿ ಕೋರಬಹುದು ಅವೆಂದರೆ -

- ಬೇರೆ ಹೆಣ್ಣಿನೊಡನೆ (ಗಂಡಿನೊಡನೆ) ದೇಹ ಸಂಬಂಧವಿಟ್ಟುಕೊಂಡಿರುವುದು.
- ಕಾರಣವಿಲ್ಲದೆ ಹೆಂಡತಿಯನ್ನು (ಅಥವಾ ಗಂಡನನ್ನು) ಬಿಟ್ಟುಬಿಟ್ಟಿರುವುದು.
- ಬೇರೆ ಧರ್ಮಕ್ಕೆ ಪರಿವರ್ತನೆಯಾಗುವುದು.
- ಗುಹ್ಯರೋಗದಂತಹ ಅಂಟುರೋಗಗಳಿಂದ ಬಳಲುತ್ತಿರುವುದು.
- ಗಂಡ (ಹೆಂಡತಿ) ಎಲ್ಲಿದ್ದಾನೆಂದು ಏಳು ವರ್ಷಗಳಿಗಿಂತ ಹೆಚ್ಚಿನ ಕಾಲ ತಿಳಿಯದಿರುವುದು.

ಹೀಗೆ ನ್ಯಾಯಾಲಯದ ಅನುಮತಿ ಕೋರಿ ಬೇರೆ ಬೇರೆ ವಾಸಿಸುವ ಸಮಯದಲ್ಲಿ ಮದುವೆ ಇನ್ನೂ ಪೂರ್ತಿಯಾಗಿ ಮುರಿದುಹೋಗಿರುವುದಿಲ್ಲ. ಬೇರೆ ಬೇರೆ ವಾಸಿಸುತ್ತಿದ್ದರೂ ಬೇರೆ ಮದುವೆಯಾಗುವಂತಿಲ್ಲ. ಈ ಸಮಯದಲ್ಲಿ ಗಂಡಹೆಂಡತಿಯರ ಮನಸ್ಸು ಸರಿಹೋದರೆ ಮತ್ತೆ ಒಟ್ಟಿಗೆ ಬಾಳಬಹುದು.

ಶೀಲ ಮತ್ತು ಮುರಳಿ ಬೇರೆ ಬೇರೆ ವಾಸಮಾಡಲು ಪ್ರಾರಂಭಿಸಿದರು. ಮುರಳಿಗೆ ತನ್ನ ಜೊತೆಯಲ್ಲಿಯೇ ಕೆಲಸ ಮಾಡುವ ಸುಧಾಳನ್ನು ಮದುವೆಯಾಗುವ

ಆಸೆ. ಆದರೆ ಅವನು ಈಗಲೇ ಮತ್ತೆ ಇನ್ನೊಂದು ಮದುವೆಯಾಗುವಂತಿಲ್ಲ. ಅವನು ಸುಧಾಳನ್ನು ಮದುವೆಯಾಗಬೇಕಾದರೆ ಮೊದಲು ಅವನು ಶೀಲಾಳಿಂದ ವಿವಾಹ ವಿಚ್ಛೇದನ ಪಡೆಯಬೇಕು. ಅದಕ್ಕಾಗಿ ಮುರಳಿ ವಕೀಲರ ಬಳಿಗೆ ಹೋದ. ತಾನು ಶೀಲಳಿಂದ ಪ್ರತ್ಯೇಕವಾಗಿ ವಾಸಿಸಲು ನ್ಯಾಯಾಲಯದ ಅನುಮತಿ ಪಡೆದಿದ್ದೇನೆಂದು ತಿಳಿಸಿದ. ಅದಕ್ಕೆ, ಎಷ್ಟು ವರ್ಷದಿಂದ ಶೀಲಳಿಂದ ಬೇರೆಯಾಗಿ ವಾಸಿಸುತ್ತಿದ್ದಾನೆಂದು ವಕೀಲರು ಕೇಳಿದರು. ಒಂದು ವರ್ಷದಿಂದ ಎಂದು ಮುರಳಿ ಹೇಳಿದ. ಬೇರೆ ಬೇರೆಯಾಗಿ ವಾಸಿಸಲು ನ್ಯಾಯಾಲಯದ ಅನುಮತಿ ಪಡೆದ ತರುವಾಯ ಎರಡು ವರ್ಷಗಳವರೆಗೆ ವಿವಾಹ ವಿಚ್ಛೇದನಕ್ಕೆ ಅರ್ಜಿ ಹಾಕುವಂತಿಲ್ಲ ಎಂದು ವಕೀಲರು ಅವನಿಗೆ ತಿಳಿಸಿದರು.

- ಪ್ರತ್ಯೇಕವಾಗಿ ವಾಸಿಸಲು ಪ್ರಾರಂಭ ಮಾಡಿದ ಮೇಲೆ, ಒಂದು ವರ್ಷದ ಒಳಗೆ ಮತ್ತೆ ಒಟ್ಟಿಗೆ ವಾಸಿಸಲು ಪ್ರಾರಂಭಿಸದಿದ್ದರೆ ಅಂಥ ಗಂಡ ಅಥವಾ ಹೆಂಡತಿ ವಿವಾಹ ವಿಚ್ಛೇದನ ಕೋರಿ ಅರ್ಜಿ ಸಲ್ಲಿಸಬಹುದು.

ಮುರಳಿ ಒಂದು ವರ್ಷ ಕಾದ. ಅವರಿಬ್ಬರೂ ಪ್ರತ್ಯೇಕವಾಗಿ ವಾಸಿಸಲು ಪ್ರಾರಂಭ ಮಾಡಿ ಒಂದು ವರ್ಷವಾದರೂ ಅವರ ಸಂಬಂಧ ಸರಿಹೋಗಲಿಲ್ಲ. ಇಬ್ಬರೂ ಪರಸ್ಪರ ವಿವಾಹ ವಿಚ್ಛೇದನ ಬಯಸಿದರು.

- ಪರಸ್ಪರ ಒಪ್ಪಿಗೆಯ ಮೇಲೆ ವಿವಾಹ ವಿಚ್ಛೇದನ ಪಡೆಯಬಹುದು. ಪರಸ್ಪರ ಒಪ್ಪಿಗೆಯಿದ್ದರೆ, ಬೇಗ ಹಾಗೂ ಸುಲಭವಾಗಿ ವಿಚ್ಛೇದನ ಪಡೆಯಬಹುದು.

ಶೀಲ ಮತ್ತು ಮುರಳಿ ಪರಸ್ಪರ ಒಪ್ಪಿಗೆಯಿಂದ ವಿಚ್ಛೇದನ ಪಡೆದರು.

ಯಾವ ಯಾವ ಕಾರಣಗಳಿಗಾಗಿ ಪ್ರತ್ಯೇಕ ವಾಸಿಸಲು ನ್ಯಾಯಾಲಯದ ಆದೇಶ ಪಡೆಯಬಹುದೋ ಅವೇ ಕಾರಣಗಳ ಮೇಲೆ ವಿಚ್ಛೇದನವನ್ನು [illegible] ಪಡೆಯಬಹುದು.

ಹೆಂಡತಿ ಮಾತ್ರ ಕೆಲವೊಂದು ಹೆಚ್ಚಿನ ಕಾರಣಗಳಿಗಾಗಿ ವಿವಾಹ ವಿಚ್ಛೇದನ ಪಡೆಯಬಹುದು - ಅವೆಂದರೆ :

- ಪತಿಯ ಮರು ವಿವಾಹ.

- ಪತಿಯು ಅತ್ಯಾಚಾರ, ಪುಂಮೈಥುನ, ವಿಷಯಲಂಪಟತನದಂಥ ಅಪರಾಧ ಮಾಡಿದರೆ ಆಗ ಹೆಂಡತಿ ವಿಚ್ಛೇದನ ಕೇಳಬಹುದು.

- ಹುಡುಗಿಗೆ ೧೫ ವರ್ಷ ವಯಸ್ಸಾಗುವುದಕ್ಕೆ ಮುಂಚೆ ಅವಳಿಗೆ ಮದುವೆಯಾಗಿದ್ದರೆ, ೧೮ ವರ್ಷ ತುಂಬುವುದರೊಳಗೆ ವಿಚ್ಛೇದನ ಕೇಳಬಹುದು.

- ಹದಿನೆಂಟು ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯೊಂದಿಗೆ ಮದುವೆಯಾಗುವುದು ಅಪರಾಧ. ೧೫ ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯೊಂದಿಗಿನ ಲೈಂಗಿಕ ಸಂಪರ್ಕ ಅತ್ಯಾಚಾರ ಎನಿಸಿಕೊಳ್ಳುತ್ತದೆ. ಅಂಥ ಹುಡುಗಿ ಸ್ವತಃ ತನ್ನ ಹೆಂಡತಿಯಾಗಿದ್ದರೂ ಅದು ಅತ್ಯಾಚಾರವೆನಿಸಿಕೊಳ್ಳುತ್ತದೆ. ಅದು ಅಪರಾಧ.

ಸೂಸನ್ ಮತ್ತು ಕ್ರಿಸ್ಟೋಫರ್ ಇಬ್ಬರೂ ಕ್ರೈಸ್ತ ಧರ್ಮಕ್ಕೆ ಸೇರಿದವರು. ಅವರು ಅವರ ಧರ್ಮದಲ್ಲಿರುವ ಪದ್ಧತಿಯ ಪ್ರಕಾರ ವಿವಾಹವಾಗಬಹುದು.

- ರೋಮನ್ ಕ್ಯಾಥೋಲಿಕ್ ಕ್ರೈಸ್ತ ಪಂಗಡದವರು, ಪ್ರಾಟೆಸ್ಟೆಂಟ್ ಮತದವರು ಮತ್ತು ಭಾರತೀಯ ಕ್ರೈಸ್ತರು - ಇವರೆಲ್ಲರಿಗೂ ಭಾರತೀಯ ಕ್ರೈಸ್ತ ವಿವಾಹ ಕಾನೂನು ಅನ್ವಯಿಸುತ್ತದೆ.

- ಭಾರತೀಯ ಕ್ರೈಸ್ತ ಎಂದರೆ ಕ್ರೈಸ್ತ ಧರ್ಮಕ್ಕೆ ಪರಿವರ್ತನೆ ಹೊಂದಿರುವ ಒಬ್ಬ ಭಾರತೀಯ.



ಕ್ರೈಸ್ತರಲ್ಲಿ ವಿವಾಹ

- ಭಾರತೀಯ ಕ್ರೈಸ್ತರಲ್ಲಿ ವಧುವಿಗೆ ೧೮ ವರ್ಷಗಳು ಹಾಗೂ ವರನಿಗೆ ೨೧ ವರ್ಷಗಳಾಗಿರಬೇಕು.

- ಮದುವೆಯಾಗುವ ವ್ಯಕ್ತಿಗೆ ಜೀವಂತ ಪತ್ನಿ ಅಥವಾ ಪತಿ ಇರಬಾರದು.

ಟಾಮ್ ಮತ್ತು ಜೋಸೆಫಿನ್ ಇವರ ವಿವಾಹವಾಗಿ ಎರಡು ವರ್ಷ ಕಳೆದಿತ್ತು. ಟಾಮನದು ಮೊದಲಿನಿಂದಲೂ ಸಂಶಯ ಸ್ವಭಾವ. ಜೋಸೆಫಿನಳಿಗೆ ಕಾರಣವಿಲ್ಲದೆ ಕಿರುಕುಳ ಕೊಡಲು ಪ್ರಾರಂಭಿಸಿದ. ದೈಹಿಕವಾಗಿ ಮತ್ತು ಮಾನಸಿಕವಾಗಿ ಅವಳನ್ನು ಹಿಂಸಿಸುತ್ತಿದ್ದ. ಆದರೆ, ಜೋಸೆಫಿನ್ ಇದೊಂದೇ ಕಾರಣಕ್ಕೆ ಗಂಡನಿಂದ ವಿಚ್ಛೇದನ ಪಡೆಯುವಂತಿಲ್ಲ. ಏಕೆಂದರೆ ಟಾಮ್ ಪರಸ್ತ್ರೀ ಸಂಗವನ್ನು ಮಾಡಿಲ್ಲ.

ಕ್ರೈಸ್ತ ಕಾನೂನಿನಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ವಿಚ್ಛೇದನಕ್ಕೆ ಬೇರೆ ಬೇರೆ ಕಾರಣಗಳಿವೆ.

- ಪತಿ ತನ್ನ ಹೆಂಡತಿ ವ್ಯಭಿಚಾರಿ ಎಂಬ ಒಂದೇ ಒಂದು ಕಾರಣದ ಮೇಲೆ ವಿಚ್ಛೇದನಕ್ಕಾಗಿ ಅರ್ಜಿ ಸಲ್ಲಿಸಬಹುದು.
- ಆದರೆ ಪತ್ನಿಗೆ ತನ್ನ ಪತಿಯಿಂದ ವಿಚ್ಛೇದನ ಪಡೆಯಲು ಹೆಚ್ಚಿನ ಕಾರಣಗಳಿವೆ.
- ಪತಿ ಬೇರೆ ಧರ್ಮಕ್ಕೆ ಮತಾಂತರ ಹೊಂದಿದ್ದರೆ;
- ಬೇರೊಬ್ಬಳನ್ನು ಮದುವೆ ಮಾಡಿಕೊಂಡಿದ್ದರೆ;
- ಎರಡು ವರ್ಷಗಳ ಕಾಲ ಅಥವಾ ಅದಕ್ಕೂ ಹೆಚ್ಚಿನ ಕಾಲ ಹೆಂಡತಿಯನ್ನು ಬಿಟ್ಟುಬಿಟ್ಟಿದ್ದರೆ;
- ಲೈಂಗಿಕ ಅಪರಾಧಿಯಾಗಿದ್ದರೆ

ಪತ್ನಿ ಪತಿಯಿಂದ ವಿಚ್ಛೇದನ ಪಡೆಯಬಹುದು. ಆದರೆ ಈ ಯಾವುದೇ ಕಾರಣವಿದ್ದರೂ ಅದರ ಜೊತೆಗೆ ತನ್ನ ಪತಿ ವ್ಯಭಿಚಾರಿ ಎಂಬುದನ್ನು ಅವಳು ರುಜುವಾತು ಪಡಿಸಬೇಕು. ಆದರೆ ವ್ಯಭಿಚಾರದ ಒಂದೇ ಕಾರಣದ ಮೇಲೆ ಪತ್ನಿ ಪತಿಯಿಂದ ವಿಚ್ಛೇದನ ಪಡೆಯಲು ಅವಕಾಶವಿಲ್ಲ.

ಟಾಮ್‌ನ ವರ್ತನೆಯಿಂದ ಬೇಸತ್ತು ಜೋಸೆಫಿನ್ ತಾನೂ ತಿರುಗಿ ಬಿದ್ದಳು. ಮನೆಯ ಶಾಂತಿ ಹಾಳಾಯಿತು. ಟಾಮ್ ರೋಸಿಯ ಸಂಗ ಮಾಡಿದ. ಮನೆಯಲ್ಲಿ ಸಿಗದ ಶಾಂತಿಯನ್ನು ರೋಸಿಯ ಸಂಗದಲ್ಲಿ ಪಡೆಯಲು ಪ್ರಾರಂಭಿಸಿದ.

ಈಗ ಜೋಸೆಫಿನ್ ಕ್ರೌರ್ಯ ಮತ್ತು ವ್ಯಭಿಚಾರದ ಕಾರಣದ ಮೇಲೆ ಟಾಮ್‌ನಿಂದ ವಿಚ್ಛೇದನ ಪಡೆಯಬಹುದು ಅಲ್ಲದೆ ಅವನಿಂದ ಜೀವನಾಂಶವನ್ನು ಪಡೆಯಬಹುದು.

ಮುಸಲ್ಮಾನರಿಗೆ ವಿವಾಹ ಒಂದು ಕರಾರು. ಮಕ್ಕಳನ್ನು ಪಡೆಯುವುದು ಅದರ ಉದ್ದೇಶ. ಇಸ್ಲಾಂ ಕಾನೂನಿನ ಮೇರೆಗೆ ಇಸ್ಲಾಂ ಧರ್ಮವನ್ನು ಅನುಸರಿಸುವವರು ಮಾತ್ರ ವಿವಾಹವಾಗಬಹುದು.

ಅಬ್ದುಲ್ಲನ ಮದುವೆಯನ್ನು ಪರ್ವೀನಳೊಡನೆ ಮಾಡಲು ನಿರ್ಧರಿಸಿದರು. ಅಬ್ದುಲ್ಲನ ಕಡೆಯವರು ವಿವಾಹಕ್ಕೆ ಪ್ರಸ್ತಾಪ ಮಾಡಬೇಕು. ಅದನ್ನು ಪರ್ವೀನಳ ಕಡೆಯವರು ಅಂಗೀಕರಿಸಬೇಕು. ಇದನ್ನು 'ನಿಕಾ' ಎಂದು ಕರೆಯುತ್ತಾರೆ.

- ಪ್ರಸ್ತಾಪ ಮತ್ತು ಅಂಗೀಕಾರ ಬರವಣಿಗೆಯಲ್ಲಿ ಇರಬೇಕಾದುದಿಲ್ಲ. ಅದನ್ನು ಮೌಖಿಕವಾಗಿ ಮಾಡಬಹುದು. ಪ್ರಸ್ತಾಪ ಮತ್ತು ಅಂಗೀಕಾರವನ್ನು ಒಂದೇ ಸಮಯದಲ್ಲಿ ಮಾಡಬೇಕು.
- ಮೌಲ್ವಿ 'ನಿಕಾ'ವನ್ನು ನೆರವೇರಿಸುವಾಗ ಸಾಕ್ಷಿದಾರರು ಇರಬೇಕು.
- ಮೌಲ್ವಿಗಳ ಬಳಿ ಇರುವ ರಿಜಿಸ್ಟರಿನಲ್ಲಿ ವಧು, ವರ ಹಾಗೂ ಸಾಕ್ಷಿಗಳು ಸಹಿ ಮಾಡಬೇಕು.
- ವಿವಾಹ ಒಪ್ಪಂದವನ್ನು ಬರೆದಿದ್ದರೆ ಅದನ್ನು 'ನಿಕಾ-ನಾಮ' ಎನ್ನುತ್ತಾರೆ. ಇದಕ್ಕೂ ಸಹ ವಧುವರರು ಸಹಿ ಹಾಕಬೇಕು.
- ವಿವಾಹದ ಸಮಯದಲ್ಲಿ ಧಾರ್ಮಿಕ ಆಚರಣೆಗಳ ಅಗತ್ಯವಿಲ್ಲ. ಪುರೋಹಿತರು ಇರಲೇಬೇಕೆಂಬುದಿಲ್ಲ.
- ಸುನ್ನಿಗಳಲ್ಲಿ ಸಾಕ್ಷಿದಾರರು ಇರಬೇಕು. ಷಿಯಾಗಳಲ್ಲಿ ಸಾಕ್ಷಿದಾರರು ಇರಬೇಕಾದುದಿಲ್ಲ.
- ವಿವಾಹವನ್ನು ನೋಂದಾಯಿಸುವುದು ಕಡ್ಡಾಯವಲ್ಲ.

■ ವಿವಾಹದ ಸಮಯದಲ್ಲಿ ಅಬ್ದುಲ್ಲ ಪರ್ವೀನಳಿಗೆ ಒಂದಷ್ಟು ಹಣ ಕೊಡುತ್ತಾನೆ. ಇದನ್ನು 'ಮೆಹರ್' ಎನ್ನುತ್ತಾರೆ.

■ 'ಮೆಹರ್' ಎಂಬುದು ಮುಸ್ಲಿಮರಲ್ಲಿ ವರ ವಧುವಿಗೆ ವಿವಾಹ ಸಮಯದಲ್ಲಿ ನೀಡುವ ಹಣ. ಎಂದರೆ ವಧುದಕ್ಷಿಣೆ. ಇದು ವಿವಾಹದಲ್ಲಿ ಕೊಡಲೇಬೇಕಾದುದು. ಕಡ್ಡಾಯವಾಗಿ ಕೊಡಬೇಕಾದುದು.

■ ಇದು ಹಣದ ರೂಪದಲ್ಲಿರಬಹುದು ಇಲ್ಲವೇ ಆಸ್ತಿಯಾಗಿರಬಹುದು.

■ ಇದನ್ನು ಸಾಮಾನ್ಯವಾಗಿ ವಿವಾಹ ಸಮಯದಲ್ಲಿ ನಿಗದಿಪಡಿಸಲಾಗುತ್ತದೆ. ವಿವಾಹದ ನಂತರವೂ ಇದನ್ನು ನಿಗದಿಪಡಿಸಬಹುದು.

■ ಮೆಹರ್‌ನಲ್ಲಿ ಎರಡು ಬಗೆ. ಕೂಡಲೇ ಸಂದಾಯ ಮಾಡಬೇಕಾದುದು ಮತ್ತು ಮುಂದೂಡಲಾದುದು. ಮುಂದೂಡಲಾದ ಮೆಹರ್ ಅನ್ನು ಮುಸ್ಲಿಂ ಪತ್ನಿ ತನ್ನ ವಿವಾಹ ಕೊನೆಗೊಂಡಂದು ಪಡೆಯಬಹುದು.

■ ಮೆಹರ್ ಮೊತ್ತವನ್ನು 'ನಿಕಾನಾಮ'ದಲ್ಲಿ ದಾಖಲು ಮಾಡಲಾಗುತ್ತದೆ.

ಅಬ್ದುಲ್ಲ ಪರ್ವೀನಳನ್ನು ಮದುವೆಯಾದ ನಂತರ ಮತ್ತೆ ಎರಡು ಮದುವೆಯಾದ.



■ ಮುಸ್ಲಿಂ ಪುರುಷ ನಾಲ್ವರು ಪತ್ನಿಯರನ್ನು ಹೊಂದಿರಬಹುದು. ಇದಕ್ಕೆ ಮುಸ್ಲಿಂ ವೈಯಕ್ತಿಕ ಕಾನೂನಿನಲ್ಲಿ ಅವಕಾಶವಿದೆ. ಆದರೆ ಅವನು ಸರ್ಕಾರಿ ನೌಕರನಾಗಿದ್ದರೆ, ಅದಕ್ಕೆ ಸರ್ಕಾರದ ಅನುಮತಿ ಪಡೆಯಬೇಕಾಗುತ್ತದೆ.

■ ನಾಲ್ವರು ಪತ್ನಿಯರನ್ನೂ ಅವನು ಒಂದೇ ರೀತಿಯಲ್ಲಿ ನೋಡಿಕೊಳ್ಳಬೇಕು. ಅದು ಸಾಧ್ಯವಿಲ್ಲದಿದ್ದಾಗ ಒಬ್ಬರಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿರಬಾರದು.

■ ಮುಸ್ಲಿಂ ಸ್ತ್ರೀ ಒಬ್ಬರಿಗಿಂತ ಹೆಚ್ಚು ಪತಿಯರನ್ನು ಹೊಂದಿರಬಾರದು.

■ ಮುಸ್ಲಿಂ ವಿಧವೆ, ವಿವಾಹ ವಿಚ್ಛೇದನ ಪಡೆದವಳು ಮರುಮದುವೆಯಾಗಬಹುದು. ಆದರೆ ಆಕೆ ಇದ್ದತ್ ಅವಧಿಗೆ ಮುನ್ನ ಮರುಮದುವೆ ಆಗಬಾರದು. ಇದ್ದತ್ ಅವಧಿ-ಮೂರು ಮುಟ್ಟಿನ ಅವಧಿಯಾಗಿರುತ್ತದೆ.

■ ಬಷೀರ್ ಮತ್ತು ಆಜ್ರಾಳ ಮದುವೆಯಾಯಿತು. ಮದುವೆಯಾದಾಗ ಬಷೀರನಿಗೆ ೧೮ ವರ್ಷ, ಆಜ್ರಾಳಿಗೆ ೧೬ ವರ್ಷ.

■ ಮುಸ್ಲಿಂ ಕಾನೂನಿನ ಪ್ರಕಾರ ಇದು ಕಾನೂನುಬದ್ಧ ವಿವಾಹ.

■ ಒಬ್ಬ ಅಪ್ರಾಪ್ತ ವಯಸ್ಕ ಹದಿನೈದು ವರ್ಷ ವಯಸ್ಸಾದಾಗ ಹರಯವನ್ನು ಪಡೆಯುತ್ತಾನೆ.

■ ಬಷೀರ್ ಮತ್ತು ಆಜ್ರಾ ಸ್ವಯಿಚ್ಛೆಯಿಂದ ಮದುವೆಯಾಗಿದ್ದರೆ ಅದು ಅಪರಾಧ.

■ ಬಾಲ್ಯವಿವಾಹ ನಿಗ್ರಹ ಕಾನೂನಿನ ಪ್ರಕಾರ ವರನಿಗೆ ೨೧ ವರ್ಷ ವಧುವಿಗೆ ೧೮ ವರ್ಷ ವಯಸ್ಸಾಗಿರಬೇಕು.

■ ಮುಸ್ಲಿಂ ಪುರುಷನಿಗೆ ಹೆಂಡತಿ ಬೇಡವೆನಿಸಿದರೆ ಕಾರಣಗಳನ್ನೇನೂ ಕೊಡದೆ 'ತಲಾಕ್' ಎಂದು ಹೇಳಿ ಪತ್ನಿಯಿಂದ ವಿಚ್ಛೇದನ ಪಡೆಯಬಹುದು. ಆದರೆ ಪತ್ನಿ ಹೀಗೆ ವಿಚ್ಛೇದನ ಪಡೆಯುವ ಹಾಗಿಲ್ಲ.

ರೆಹಮಾನ್ ಮತ್ತು ಅಮೀನಾ ಇವರು ವಿವಾಹಕ್ಕೆ ಮುಂಚೆ ಒಂದು ಒಪ್ಪಂದ ಮಾಡಿಕೊಂಡರು. ರೆಹಮಾನ್ ಅಮೀನಳಿಂದ ಆರು ತಿಂಗಳಿಗಿಂತ ಹೆಚ್ಚಿನ ಅವಧಿಯವರೆಗೆ

ದೂರ ಉಳಿಯಬಾರದು. ಹೀಗೆ ದೂರ ಉಳಿದರೆ ಅಮೀನ ರೆಹಮಾನನಿಗೆ ವಿವಾಹ ವಿಚ್ಛೇದನ ನೀಡಬಹುದು - ಇದು ಒಪ್ಪಂದ. ಮದುವೆಯಾದ ನಂತರ ರೆಹಮಾನ್ ಅಮೀನಳಿಂದ ಆರು ತಿಂಗಳಿಗೂ ಹೆಚ್ಚು ಕಾಲ ದೂರ ಉಳಿದ. ಅಮೀನ ರೆಹಮಾನನಿಗೆ ವಿಚ್ಛೇದನ ನೀಡಿದಳು.

- ಒಂದು ನಿರ್ದಿಷ್ಟ ಘಟನೆ ನಡೆದಾಗ ಪತ್ನಿ ವಿಚ್ಛೇದನ ನೀಡಬಹುದೆಂದು ಇಬ್ಬರೂ ಒಪ್ಪಂದ ಮಾಡಿಕೊಳ್ಳಬಹುದು.

- ವಿವಾಹದ ನಂತರ ವಿಚ್ಛೇದನ ನೀಡುವ ಹಕ್ಕನ್ನು ಪತಿ ತನ್ನ ಪತ್ನಿಗೆ ನೀಡಬಹುದು.

- ಪತಿಯ ಸಮ್ಮತಿಯಿಂದ ಪತಿಗೆ ಪರಿಹಾರ ನೀಡಿ ಪತ್ನಿ ವಿವಾಹ ವಿಚ್ಛೇದನ ಪಡೆಯಬಹುದು. ಇದಕ್ಕೆ 'ಖುಲಾ' ಎನ್ನುತ್ತಾರೆ.

- ಪತಿ ಪತ್ನಿಯರು ಪರಸ್ಪರ ಒಪ್ಪಿಗೆಯಿಂದ ಪಡೆಯುವ ವಿವಾಹ ವಿಚ್ಛೇದನಕ್ಕೆ 'ಮುಬಾರಕ್' ಎನ್ನುತ್ತಾರೆ.

ಅಮ್ಜದ್ ಮತ್ತು ಫಾತಿಮಾಳ ವಿವಾಹವಾಗಿ ಎರಡು ವರ್ಷಗಳು ಕಳೆಯುವುದರಲ್ಲೇ ಅಮ್ಜದ್ ಫಾತಿಮಾಳಿಗೆ ಮಾನಸಿಕವಾಗಿ ಹಾಗೂ ದೈಹಿಕವಾಗಿ ಹಿಂಸೆ ನೀಡಲಾರಂಭಿಸಿದ. ಫಾತಿಮಾ ಈ ಕಾರಣದ ಮೇಲೆ ಕಾನೂನಿನ ಪ್ರಕಾರ ನ್ಯಾಯಾಲಯದ ಮೂಲಕ ವಿಚ್ಛೇದನ ಪಡೆಯಬಹುದು. ಮುಸ್ಲಿಂ ಮಹಿಳೆ ವಿಚ್ಛೇದನ ಪಡೆಯಬಹುದಾದ ಇನ್ನಿತರ ಕಾರಣಗಳು ಎಂದರೆ -

- ನಾಲ್ಕು ವರ್ಷಗಳ ಕಾಲ ಆಕೆಯ ಗಂಡ ಎಲ್ಲಿರುವನೆಂಬ ಸುಳಿವು ಸಿಗದೆ ಇರುವುದು;

- ತನ್ನ ಪತಿ ತನಗೆ ಜೀವನಾಂಶವನ್ನೂ ಕೊಡದೆ ಎರಡು ವರ್ಷಗಳ ಕಾಲ ತನ್ನನ್ನು ನಿರ್ಲಕ್ಷ್ಯದಿಂದ ಕಂಡ ಎಂಬುದು;

- ಪತಿಗೆ ಏಳು ವರ್ಷಗಳ ಅವಧಿಗೆ ಅಥವಾ ಅದಕ್ಕೂ ಹೆಚ್ಚಿನ ಅವಧಿಯ ಕಾರಾಗೃಹ ವಾಸದ ಶಿಕ್ಷೆ ವಿಧಿಸಿರುವುದು;
- ಸಕಾರಣವಿಲ್ಲದೆ ಪತಿ ತನ್ನ ವೈವಾಹಿಕ ಕರ್ತವ್ಯಗಳನ್ನು ಮೂರು ವರ್ಷಗಳ ಕಾಲ ಪಾಲಿಸದಿರುವುದು;
- ಪತಿ ಮದುವೆಯ ಸಮಯದಲ್ಲಿಯೇ ನಪುಂಸಕನಿದ್ದು ಹಾಗೆಯೇ ಮುಂದುವರಿದಿರುವುದು;
- ಸತತ ಎರಡು ವರ್ಷಗಳ ಕಾಲ ಮನೋರೋಗಿಯಾಗಿದ್ದರೆ;
- ತನಗೆ ಹದಿನೈದು ವರ್ಷಗಳು ತುಂಬುವುದರೊಳಗೆ ತನ್ನ ಮದುವೆ ಮಾಡಿದ್ದು ಆ ಮದುವೆ ತನಗಿಷ್ಟವಿಲ್ಲವೆಂದು ನಿರಾಕರಿಸುವುದು;
- ಪತಿಯು ಕ್ರೌರ್ಯದಿಂದ ವರ್ತಿಸುತ್ತಾನೆ ಎಂಬುದು;
- ಮುಸ್ಲಿಂ ಕಾನೂನು ಮಾನ್ಯ ಮಾಡುವ ಇತರ ಯಾವುದೇ ಕಾರಣ.

***

## ವಿಶೇಷ ವಿವಾಹ ಕಾನೂನು

ನಿಶಾ ಹತ್ತೊಂಬತ್ತು ವರುಷದ ತರುಣಿ. ಅವಳ ತರಗತಿಯಲ್ಲೆ ಓದುವ ರಷೀದನನ್ನು ಇಷ್ಟಪಟ್ಟಳು. ಅವನೂ ಇವಳನ್ನು ಪ್ರೀತಿಸಿದ. ಇಬ್ಬರೂ ಮದುವೆಯಾಗಲು ಬಯಸಿದರು. ಆದರೆ ಇಬ್ಬರೂ ಬೇರೆ ಬೇರೆ ಧರ್ಮಕ್ಕೆ ಸೇರಿದವರು. ನಿಶಾ ಹಿಂದೂವಾದರೆ ರಷೀದ ಮುಸ್ಲಿಂ ಧರ್ಮಕ್ಕೆ ಸೇರಿದವನು. ಮನೆಯವರು ಈ ಮದುವೆಯನ್ನು ಒಪ್ಪುವುದಿಲ್ಲವೆಂದು ತಿಳಿದಿತ್ತು. ಇಬ್ಬರಿಗೂ, ವಿಷಯ ತಿಳಿದ ಕೂಡಲೇ ತನ್ನನ್ನು

ಮನೆಯಿಂದ ಹೊರಗೇ ಬಿಡುವುದಿಲ್ಲವೆಂಬ ಭಯವಿತ್ತು ನಿಶಾಳಿಗೆ. ಹಾಗಾಗಿ ಇಬ್ಬರೂ ರಿಜಿಸ್ಟರ್ಡ್ ಮದುವೆಯಾಗಲು ತೀರ್ಮಾನಿಸಿದರು.




**ವಿವಾಹ ಕಾನೂನು**
**ಮದುವೆಗೆ ಜಾತಿ ಧರ್ಮಗಳ ಸಂಕೋಲೆಯಿಲ್ಲ**

ವಿಶೇಷ ವಿವಾಹ ಅಧಿನಿಯಮ ಎಂಬ ಕಾನೂನಿನ ಅಡಿಯಲ್ಲಿ ಇಂಥ ವಿವಾಹವನ್ನು ಮಾಡಿಕೊಳ್ಳಬಹುದು. ಇದನ್ನು ಸಾಮಾನ್ಯವಾಗಿ 'ಸಿವಿಲ್ ಮದುವೆ' ಅಥವಾ 'ರಿಜಿಸ್ಟರ್ಡ್ ಮದುವೆ' ಎನ್ನುತ್ತಾರೆ.

- ಬೇರೆ ಬೇರೆ ಧರ್ಮಗಳಿಗೆ ಸೇರಿದ ವ್ಯಕ್ತಿಗಳು ಈ ಕಾನೂನಿನ ಪ್ರಕಾರ ಮದುವೆಯಾಗಬಹುದು.

- ಮದುವೆಯ ಸಾಂಪ್ರದಾಯಿಕ ಆಚರಣೆಗಳನ್ನು ಅನುಸರಿಸಿ ಮದುವೆಯಾಗಲು ಇಷ್ಟವಿಲ್ಲದ, ಯಾರು ಬೇಕಾದರೂ ಮದುವೆಯನ್ನು ನೋಂದಣಿ ಮಾಡಿಸುವ ಮೂಲಕ ರಿಜಿಸ್ಟರ್ಡ್ ಮದುವೆಯಾಗಬಹುದು.

- ಹೀಗೆ ಮದುವೆಯಾಗಲು ಇಷ್ಟಪಡುವವರು ತಾವು ವಾಸಿಸುವ ಜಿಲ್ಲೆಯ ವಿವಾಹಾಧಿಕಾರಿಯವರಿಗೆ ಮದುವೆಯ ದಿನಾಂಕಕ್ಕೆ ಮೂವತ್ತು ದಿನಗಳು ಮುಂಚಿತವಾಗಿ ನೋಟಿಸನ್ನು ಕೊಡಬೇಕು.

- ಮೂವತ್ತು ದಿನಗಳಲ್ಲಿ ಈ ಮದುವೆಗೆ ಯಾವುದೇ ಆಕ್ಷೇಪಣೆ ಬರದಿದ್ದರೆ ವಿವಾಹಾಧಿಕಾರಿ ವಿವಾಹವನ್ನು ನೋಂದಾಯಿಸುತ್ತಾರೆ.

- ಇಂಥ ಮದುವೆ ತನ್ನ ಮನೆಯಲ್ಲೇ ನಡೆಯಬೇಕೆಂದು ಹುಡುಗ ಅಥವಾ ಹುಡುಗಿ ಇಷ್ಟಪಟ್ಟರೆ ಆಗ ವಿವಾಹಾಧಿಕಾರಿ ಅಂಥ ಸ್ಥಳದಲ್ಲೇ ಮದುವೆಯನ್ನು ನಡೆಸುತ್ತಾರೆ. ಆದರೆ ಇದಕ್ಕೆ ನಿಗದಿಪಡಿಸಿದ ಶುಲ್ಕವನ್ನು ಸಂದಾಯ ಮಾಡಿರಬೇಕು.

ವಿನೋದ ಮತ್ತು ಅಂಜನಾ ಇಬ್ಬರ ಧರ್ಮವೂ ಒಂದೇ. ಆದರೆ ಬೇರೆ ಬೇರೆ ಜಾತಿಗೆ ಸೇರಿದವರು. ಇಬ್ಬರೂ ಮದುವೆ ಮಾಡಿಕೊಳ್ಳಲು ಬಯಸಿದರು. ಮನೆಯವರ ವಿರೋಧವನ್ನು ಲೆಕ್ಕಿಸಲಿಲ್ಲ. ವಿವಾಹದ ನೋಟೀಸನ್ನು ಕೊಟ್ಟ ಮೂವತ್ತು ದಿನಗಳ ನಂತರ ವಿವಾಹಾಧಿಕಾರಿಯ ಕಾರ್ಯಾಲಯದಲ್ಲಿ ಮದುವೆ ನಡೆದುಹೋಯಿತು. ಅಲ್ಲಿ ಹಾಜರಿದ್ದವರು ವಿವಾಹಾಧಿಕಾರಿ ಮತ್ತು ವಿನೋದನ ಗೆಳೆಯರು. ವಿನೋದ ಅಂಜನಾಳಿಗೆ "ನಾನು ನಿನ್ನನ್ನು ವಿಧಿಸಮ್ಮತ ಹೆಂಡತಿಯನ್ನಾಗಿ ಸ್ವೀಕರಿಸುತ್ತೇನೆ" ಎಂದು ಗಟ್ಟಿಯಾಗಿ

ಹೇಳಿದ. ಅಂಜನಾ ಅದೇರೀತಿ ಅವನಿಗೆ "ನಾನು ನಿನ್ನನ್ನು ವಿಧಿಸಮ್ಮತ ಪತಿಯನ್ನಾಗಿ ಸ್ವೀಕರಿಸುತ್ತೇನೆ" ಎಂದು ಹೇಳಿದಳು. ವಿವಾಹ ಪ್ರಮಾಣಪತ್ರಗಳ ಪುಸ್ತಕದಲ್ಲಿ ವಿನೋದ ಹಾಗೂ ಅಂಜನಾ ಸಹಿ ಮಾಡಿದರು. ವಿನೋದನ ಗೆಳೆಯರು ಆ ಮದುವೆಗೆ ಸಾಕ್ಷಿಯಾಗಿ ರುಜು ಹಾಕಿದರು. ಅಲ್ಲಿಗೆ ವಿನೋದ ಹಾಗೂ ಅಂಜನಾಳ ಮದುವೆ ವಿಧ್ಯುಕ್ತವಾಗಿ ನೆರವೇರಿತು ಎಂದರ್ಥ. ಇನ್ನು ಮುಂದೆ ಅವರು ಪತಿಪತ್ನಿಯರು.

- ಇಂಥ ವಿವಾಹ ವಿವಾಹಾಧಿಕಾರಿಯ ಸಮಕ್ಷಮ ನಡೆಯುತ್ತದೆ.
- ಆ ಸಮಯದಲ್ಲಿ ಮೂವರು ಸಾಕ್ಷಿದಾರರು ಹಾಜರಿರಬೇಕು.
- ವಿವಾಹವಾಗುವ ವ್ಯಕ್ತಿ "ನಾನು ನಿನ್ನನ್ನು ಪತಿಯನ್ನಾಗಿ (ಪತ್ನಿಯನ್ನಾಗಿ) ಸ್ವೀಕರಿಸಿದ್ದೇನೆ" ಎಂದು ಕೇಳುವಂತೆ ಹೇಳಬೇಕು.
- ವಿವಾಹವಾಗುವವರಿಬ್ಬರೂ ವಿವಾಹ ನೋಂದಣಿ ಪುಸ್ತಕದಲ್ಲಿ ಸಹಿ ಮಾಡಬೇಕು.
- ವಿವಾಹಾಧಿಕಾರಿಯು ನಡೆದ ವಿವಾಹವನ್ನು ರಿಜಿಸ್ಟರಿನಲ್ಲಿ ದಾಖಲು ಮಾಡುತ್ತಾರೆ.

ಇಂಥ ವಿವಾಹ ಕಾನೂನು ಸಮ್ಮತ ವಿವಾಹವೆನಿಸಿಕೊಳ್ಳುತ್ತದೆ.

ಮಾಲತಿ ಲಕ್ಷಾಧೀಶನ ಒಬ್ಬಳೇ ಮಗಳು. ಮಹೇಶ ಮಾಲತಿಯ ಅತ್ತೆಯ ಮಗ. ಅವನಿಗೆ ಅತ್ತೆಯ ಮಗಳಿಗಿಂತ ಅವಳ ಆಸ್ತಿಯ ಮೇಲೆ ಕಣ್ಣು. ಮನು ಮಹೇಶನ ಗೆಳೆಯ. ತುಂಬ ಸುಂದರ. ಮಾಲತಿ ಅವನ ರೂಪಕ್ಕೆ ಮರುಳಾದಳು. ಮಹೇಶ ಅವರಿಬ್ಬರ ಗೆಳೆತನಕ್ಕೆ ಪ್ರೋತ್ಸಾಹ ನೀಡಿದ. ತನ್ನ, ಮನುವಿನ ಮದುವೆಗೆ ತಂದೆ ಒಪ್ಪುವುದಿಲ್ಲವೆಂದು ಮಾಲತಿಗೆ ತಿಳಿದಿತ್ತು. ಹಾಗಾಗಿ ಅವರಿಗೆ ತಿಳಿಸದೆ ಅವರಿಬ್ಬರೂ ರಿಜಿಸ್ಟರ್ಡ್ ಮದುವೆ ಮಾಡಿಕೊಂಡರು. ಆದರೆ ತನ್ನ ಆಸ್ತಿಯನ್ನು ಲಪಟಾಯಿಸಲು

ಮಹೇಶ ಮತ್ತು ಮನು ಹೂಡಿದ ಸಂಚು ಎಂದು ಮಾಲತಿಗೆ ಮದುವೆಯ ನಂತರ ತಿಳಿಯಿತು. ಕೂಡಲೇ ಅವಳು ತಂದೆಯ ಮನೆಗೆ ಬಂದುಬಿಟ್ಟಳು.

- ಮದುವೆಗೆ ಒಪ್ಪಿಗೆಯನ್ನು ಮೋಸದಿಂದ ಪಡೆದಿರಬಾರದು
- ಮೋಸ ಬೆಳಕಿಗೆ ಬಂದ ನಂತರ ಪತಿಪತ್ನಿಯರು ಒಟ್ಟಿಗೆ ವಾಸಮಾಡಿರಕೂಡದು
- ಮೋಸ ಬೆಳಕಿಗೆ ಬಂದ ಒಂದು ವರ್ಷದೊಳಗಾಗಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಮದುವೆಯನ್ನು ಅನೂರ್ಜಿತವೆಂದು ಘೋಷಿಸಬೇಕೆಂದು ಕೋರಬಹುದು.

ಬೇರೆ ಮದುವೆಗಳಿಗೆ ಸಂಬಂಧಪಟ್ಟಂತೆ ಇರುವ ನ್ಯಾಯಿಕ ಬೇರ್ಪಡೆ, ವಿಚ್ಛೇದನ ಇವುಗಳ ಅವಕಾಶ ಇಲ್ಲಿಯೂ ಇದೆ. ಜೀವನಾಂಶವನ್ನು ಪಡೆಯಲೂ ಮಹಿಳೆಗೆ ಅವಕಾಶ ಕಲ್ಪಿಸಲಾಗಿದೆ.

ಶ್ರೀನಿವಾಸ ಮೇರಿಯನ್ನು ಮದುವೆಯಾದ. ಶ್ರೀನಿವಾಸ ಮೇರಿಯನ್ನು ಮದುವೆಯಾದೊಡನೆಯೇ ಅವನು ತನ್ನ ಹಿಂದೂ ಅವಿಭಾಜ್ಯ ಕುಟುಂಬದೊಡನೆ ಇರುವ ಸಂಬಂಧವನ್ನು ಕಳೆದುಕೊಳ್ಳುತ್ತಾನೆ. ಹಾಗಾಗಿ ಆಸ್ತಿಗೆ ಸಂಬಂಧಿಸಿದಂತೆ ಅವನಿಗೆ ಹಿಂದೂ ಉತ್ತರಾಧಿಕಾರ ಕಾನೂನು ಅನ್ವಯಿಸುವುದಿಲ್ಲ. ಅವನಿಗೆ ಭಾರತೀಯ ಉತ್ತರಾಧಿಕಾರ ಕಾನೂನು ಅನ್ವಯಿಸುತ್ತದೆ.

## ಬಾಲ್ಯವಿವಾಹ · ಅಪರಾಧ

ಬಾಲ್ಯವಿವಾಹ ನಿಗ್ರಹ ಕಾನೂನು ಮದುವೆಯಾಗುವ ವ್ಯಕ್ತಿಗಳ ಕನಿಷ್ಠ ವಯಸ್ಸನ್ನು ನಿಗದಿಪಡಿಸುತ್ತದೆ.



**ಬಾಲ್ಯ ವಿವಾಹ – ಕಾನೂನಿಗೆ ವಿರುದ್ಧ**

ರಾಜು ಇಪ್ಪತ್ತೆರಡು ವರ್ಷದ ಯುವಕ. ಅವನು ಹದಿನಾರು ವರ್ಷದ ಮೀನಳನ್ನು ಮದುವೆಯಾದ. ಇಬ್ಬರೂ ಸ್ವಯಿಚ್ಛೆಯಿಂದ ಮದುವೆಯಾದರು. ಆದರೆ ಇದು ಕಾನೂನಿನ ಪ್ರಕಾರ ತಪ್ಪು.

- ಮದುವೆಯಾಗಬೇಕೆಂದರೆ, ಹುಡುಗನಿಗೆ ೨೧ ವರ್ಷ ಹುಡುಗಿಗೆ ೧೮ ವರ್ಷ ವಯಸ್ಸಾಗಿರಬೇಕು.

ಅಪ್ರಾಪ್ತ ವಯಸ್ಕರ ಮದುವೆಯನ್ನು ನೆರವೇರಿಸುವುದೂ ಒಂದು ಅಪರಾಧ.

ಅದನ್ನು ಮಾಡುವವರು ತಂದೆತಾಯಿಯರಾಗಿರಲಿ, ಪೋಷಕರಾಗಿರಲಿ ಶಿಕ್ಷೆಗೆ ಗುರಿಯಾಗುತ್ತಾರೆ.

ಶಿಕ್ಷೆ: ಮೂರು ತಿಂಗಳವರೆಗೆ ವಿಧಿಸಬಹುದಾದ ಕಾರಾವಾಸ ಮತ್ತು ಜುಲ್ಮಾನೆ.

ಇಂಥ ವಿವಾಹ ಅಕ್ರಮ ವಿವಾಹವೇ ಹೊರತು ಶೂನ್ಯ ವಿವಾಹವಲ್ಲ. ಹುಡುಗಿಗೆ ೧೫ ವರ್ಷ ವಯಸ್ಸಾಗುವುದಕ್ಕೆ ಮುಂಚೆ ಮದುವೆಯಾಗಿದ್ದರೆ ಆಕೆ ತನಗೆ ೧೮ ವರ್ಷ ತುಂಬುವುದರೊಳಗೆ ಅಂಥ ಮದುವೆಯನ್ನು ನಿರಾಕರಿಸಬಹುದು.

## ಜೀವನಾಂಶ

ತನ್ನ ಗಂಡ ಮರುವಿವಾಹವಾದ ಎಂಬ ಕಾರಣದ ಮೇಲೆ ಸುನಿತಾ ತನ್ನ ಗಂಡನಿಂದ ವಿಚ್ಛೇದನ ಪಡೆದಳು. ವಿಚ್ಛೇದನ ಪಡೆದ ನಂತರ ಅವಳು ತನ್ನ ತೌರಿಗೆ ಹೋಗಲಿಲ್ಲ. ತನ್ನ ತಾಯಿಗೆ ಹಾಗೂ ಅಣ್ಣಂದಿರಿಗೆ ಹೊರೆಯಾಗಿರುವುದು ಅವಳಿಗೆ ಇಷ್ಟವಿರಲಿಲ್ಲ. ಅವಳು ವಕೀಲರ ನೆರವು ಪಡೆದು ಜೀವನಾಂಶಕ್ಕಾಗಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದಳು.

ಸುನೀತಳ ಅರ್ಜಿಯನ್ನು ನ್ಯಾಯಾಲಯ ಪರಿಶೀಲಿಸಿತು. ಅವಳು ತನ್ನನ್ನು ತಾನು ನೋಡಿಕೊಳ್ಳುವ ಸಾಮರ್ಥ್ಯವಿಲ್ಲ ಎಂಬುದು ನ್ಯಾಯಾಲಯಕ್ಕೆ ಮನದಟ್ಟಾಯಿತು. ಅವಳಿಗೆ ಜೀವನಾಂಶ ನೀಡಬೇಕೆಂದು ಪತಿಗೆ ಆದೇಶ ನೀಡಿತು.

- ಜೀವನಾಂಶ ಕೋರುವ ಮಹಿಳೆ ತನ್ನನ್ನು ತಾನು ನೋಡಿಕೊಳ್ಳುವ ಸಾಮರ್ಥ್ಯ ಹೊಂದಿರಬಾರದು.
- ಜೀವನಾಂಶದ ಮೊತ್ತ ಅವಳ ಜೀವನಮಟ್ಟಕ್ಕೆ ಅನುಗುಣವಾಗಿ ಇರುತ್ತದೆ.
- ಪತಿಯ ಗಳಿಕೆಯ ಸಾಮರ್ಥ್ಯವನ್ನು ಅವಲಂಬಿಸುತ್ತದೆ.

ಇದನ್ನು ಪ್ರತಿ ತಿಂಗಳು ಪಡೆಯಬಹುದು ಇಲ್ಲವೇ ಒಟ್ಟಿಗೆ ಇಡಿಗಂಟಾಗಿ ಪಡೆಯಬಹುದು.

- ಇದನ್ನು ಮಹಿಳೆಯ ಜೀವಮಾನ ಪೂರ್ತಿ ನೀಡಲಾಗುತ್ತದೆ.

ಸುನೀತಳಿಗೆ ರಮೇಶನ ಪರಿಚಯವಾಯಿತು. ಪರಿಚಯ ಪ್ರೇಮವಾಯಿತು. ಅವರಿಬ್ಬರೂ ಮದುವೆಯಾದರು. ಅವಳ ಬಾಳಿಗೆ ನೆಲೆ ದೊರೆಯಿತು. ಈ ಕಾರಣಕ್ಕೆ ಜೀವನಾಂಶವನ್ನು ನಿಲ್ಲಿಸಲಾಯಿತು.

- ಮಹಿಳೆ ಮರುವಿವಾಹವಾದರೆ ಜೀವನಾಂಶವನ್ನು ನಿಲ್ಲಿಸಲಾಗುತ್ತದೆ.

- ಇನ್ನೊಂದು ಕಾರಣಕ್ಕೂ ಜೀವನಾಂಶವನ್ನು ನಿಲ್ಲಿಸಲಾಗುತ್ತದೆ. ಅದೆಂದರೆ

ಮಹಿಳೆ ನಡತೆಗೆಟ್ಟರೆ ಜೀವನಾಂಶವನ್ನು ನಿಲ್ಲಿಸಲಾಗುತ್ತದೆ.

ಜೀವನಾಂಶ ಎಂಬುದು ಆಹಾರ, ಬಟ್ಟೆ, ನಿವಾಸ, ಶಿಕ್ಷಣ ಮತ್ತು ವೈದ್ಯಕೀಯ ಸೇವೆಯ ವೆಚ್ಚಗಳನ್ನು ಒಳಗೊಳ್ಳುತ್ತದೆ.

ಪತ್ನಿ ಪತಿಯಿಂದ ಜೀವನಾಂಶ ಪಡೆಯಲು ಅವನಿಂದ ವಿಚ್ಛೇದನ ಪಡೆದಿರಲೇಬೇಕೆಂಬ ನಿಯಮವೇನೂ ಇಲ್ಲ.

ಯಾವುದೇ ಕಾರಣಕ್ಕೆ (ನ್ಯಾಯಿಕ ಬೇರ್ಪಡೆ ಅಥವಾ ವಿಚ್ಛೇದನ ಪಡೆಯುವ ಕಾರಣಗಳು) ಪತಿಯಿಂದ ಪ್ರತ್ಯೇಕವಾಗಿ ವಾಸಿಸುತ್ತಿದ್ದರೂ ಮಹಿಳೆ ಪತಿಯಿಂದ ಜೀವನಾಂಶ ಪಡೆಯಲು ಹಕ್ಕುಳ್ಳವಳಾಗುತ್ತಾಳೆ.

ಜೀವನಾಂಶದ ಗರಿಷ್ಠ ಮೊಬಲಗನ್ನು ಈ ಕಾನೂನು ನಿಗದಿಪಡಿಸಿಲ್ಲ.

ವಿವಾಹ ವಿಚ್ಛೇದನದ ತೀರ್ಪು ನೀಡಿದ ನ್ಯಾಯಾಲಯವೇ ಇಂತಿಷ್ಟು ಮೊತ್ತವನ್ನು ಕೊಡುವಂತೆ ಆದೇಶ ನೀಡಬಹುದು.

ರಮಾ ಮತ್ತು ರಾಘವ ಒಂದು ವರ್ಷದ ಹಿಂದೆ ಮದುವೆಯಾದರು. ಅಂದಿನಿಂದಲೂ ಒಂದು ದಿನವೂ ಅವರ ಜಗಳ ತಪ್ಪಿಲ್ಲ. ಪರಸ್ಪರ ಹೊಂದಿಕೊಳ್ಳುವುದು ಅಸಾಧ್ಯವೆನಿಸಿತು. ಬೇರೆಬೇರೆಯಾಗಿ ವಾಸಿಸಬೇಕೆಂಬ ಒಪ್ಪಂದಕ್ಕೆ ಬಂದರು.

ಪರಸ್ಪರ ಒಪ್ಪಿ ಪ್ರತ್ಯೇಕವಾಗಿ ವಾಸಿಸುತ್ತಿದ್ದರೆ ಜೀವನಾಂಶವನ್ನು ಕೇಳುವಂತಿಲ್ಲ.

ರಶೀದ್, ರಜಿಯಾ ಬೇಗಮಳಿಗೆ 'ತಲಾಕ್' ನೀಡಿದಾಗ ರಜಿಯಾ ಧರ್ಮ ಯಾವುದೇ ಇದ್ದರೂ ಪ್ರತಿಯೊಬ್ಬ ಮಹಿಳೆಯೂ ಈ ಕಾನೂನಿನ ಪ್ರಕಾರ ಜೀವನಾಂಶ ಪಡೆಯಲು ಹಕ್ಕುಳ್ಳವಳಾಗಿದ್ದಾಳೆ.

ಮುನೀರ್ ಖುರ್ಷೀದಳ ಪತಿ. ಮುನೀರ್ ಬಹಳ ಒಳ್ಳೆಯವನು. ಅವರಿಗೆ ಇಬ್ಬರು ಮಕ್ಕಳು. ಆರು ತಿಂಗಳ ಮಗಳು ಒಂದೂವರೆ ವರ್ಷದ ಮಗ. ಚಿಕ್ಕದಾದ ಚೊಕ್ಕ ಸಂಸಾರ. ಆದರೆ ಕೆಟ್ಟ ಚಟಕ್ಕೆ ಬಲಿಬಿದ್ದ ಮುನೀರ್ ಬಹಳ ಬೇಗ ಸಾಲಗಾರನಾದ. ಖುರ್ಷೀದಳ ಬಾಳು ನರಕವಾಯಿತು. ಕಾರಣವಿಲ್ಲದೆ ಖುರ್ಷೀದಳನ್ನು ಹಿಂಸಿಸಲು ಪ್ರಾರಂಭಿಸಿದ. ಅವನ ಕ್ರೌರ್ಯವನ್ನು ಇನ್ನು ಸಹಿಸುವುದು ಸಾಧ್ಯವಿಲ್ಲವೆಂದಾಗ ಖುರ್ಷೀದಳು ಮುನೀರನಿಂದ ಬಿಡುಗಡೆ ಬಯಸಿದಳು. ನ್ಯಾಯಾಲಯದ ಮೂಲಕ ವಿಚ್ಛೇದನ ಪಡೆದಳು.

ಖುರ್ಷೀದಳು ವಿಚ್ಛೇದನ ಪಡೆದಾಗ ವಿವಾಹ ಸಮಯದಲ್ಲಿ ಗೊತ್ತುಪಡಿಸಿದ, ಆದರೆ ಸಂದಾಯ ಮಾಡದೆ ಮುಂದೂಡಲಾದ ಮೆಹರನ್ನು ಪಡೆಯುತ್ತಾಳೆ. ವಿವಾಹ ಸಮಯದಲ್ಲಿ ಅವಳು ಪಡೆದ ಎಲ್ಲ ಉಡುಗೊರೆಗಳೂ ಅವಳಿಗೇ ಸೇರುತ್ತದೆ. ಅಲ್ಲದೆ, ಅವಳ ಇಬ್ಬರು ಮಕ್ಕಳ ಪೋಷಣೆಯ ವೆಚ್ಚವನ್ನು ಮಕ್ಕಳಿಗೆ ಎರಡು ವರ್ಷಗಳಾಗುವವರೆಗೆ ಮುನೀರನೇ ವಹಿಸಿಕೊಳ್ಳಬೇಕು.

ವಿವಾಹ ವಿಚ್ಛೇದನ ಪಡೆದ ಮುಸ್ಲಿಂ ಮಹಿಳೆ ಮುಂದೂಡಿದ ಮೆಹರನ್ನು ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆ.

ಇದ್ದತ್ ಅವಧಿಯಲ್ಲಿ ಜೀವನಾಂಶವನ್ನು ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆ.

ಇದ್ದತ್ ಅವಧಿಯ ನಂತರ ಅವಳ ತಂದೆತಾಯಿಯರು, ಅವಳ ವಾರಸುದಾರರು, ಮಕ್ಕಳು ಅವಳನ್ನು ಪೋಷಿಸಬೇಕು. ಅವಳನ್ನು ಪೋಷಿಸಲು ಇವರೆಲ್ಲ ವಿಫಲರಾದಾಗ ವಕ್ಫ್ ಮಂಡಲಿ ಇವಳನ್ನು ಪೋಷಿಸಬೇಕು.

ಮುಸ್ಲಿಂ ಮಹಿಳೆ ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಅಡಿಯಲ್ಲಿ ಜೀವನಾಂಶವನ್ನು ಕೋರಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು. ಆದರೆ ಇದಕ್ಕೆ ಅವಳ ವಿಚ್ಛೇದಿತ ಗಂಡನ ಒಪ್ಪಿಗೆಯನ್ನು ಪಡೆದಿರಬೇಕು.

ಕ್ರಿಶ್ಚಿಯನ್ನರಲ್ಲಿ ಪತ್ನಿ ಮಾತ್ರವೇ ಪತಿಯಿಂದ ಜೀವನಾಂಶ ಕೋರಬಹುದು.

ಪತಿ ಪತ್ನಿಯಿಂದ ಜೀವನಾಂಶ ಕೋರಲು ಅವಕಾಶವಿಲ್ಲ.

ಖಾಯಂ ಜೀವನಾಂಶ ನೀಡುವ ಸಂದರ್ಭದಲ್ಲಿ ಗರಿಷ್ಠ ಮೊಬಲಗನ್ನು ನಿಗದಿಪಡಿಸಿಲ್ಲ.

ದಂಡ ಪ್ರಕ್ರಿಯಾ ಸಂಹಿತೆಯ ೧೨೫ನೇ ಪ್ರಕರಣದ ಮೇರೆಗೂ ಜೀವನಾಂಶಕ್ಕೆ ಅರ್ಜಿ ಸಲ್ಲಿಸಬಹುದು.

ಜೀವನಾಂಶವನ್ನು ಕೊಡಬೇಕೆಂದು ನಿರ್ದೇಶಿಸಿ ನ್ಯಾಯಾಲಯ ಆದೇಶ ಅಥವಾ ಡಿಕ್ರಿ ಹೊರಡಿಸಿದರೆ ಅರ್ಧ ಗೆದ್ದಂತೆ. ನಿಜವಾದ ಸಮಸ್ಯೆ ಪ್ರಾರಂಭವಾಗುವುದು ಅದನ್ನು ಪಡೆಯುವಾಗ.

ನ್ಯಾಯಾಲಯದ ಆದೇಶದ ನಂತರವೂ ಪತಿ ಜೀವನಾಂಶವನ್ನು ಕೊಡದೆ ಇರುವ ಸಂದರ್ಭಗಳುಂಟು. ಆಗ ನ್ಯಾಯಾಲಯ ಮತ್ತೆ ನೆರವಿಗೆ ಬರುತ್ತದೆ.

ನಿರ್ದಿಷ್ಟ ಕೆಲಸದಲ್ಲಿರುವ ವ್ಯಕ್ತಿಯ ಸಂದರ್ಭದಲ್ಲಿ ಅವನ ಸಂಬಳದಿಂದ ಹಿಡಿದು ಪತ್ನಿಗೆ ಸಂದಾಯ ಮಾಡುವಂತೆ ನ್ಯಾಯಾಲಯ ಆದೇಶಿಸುತ್ತದೆ.

ಸ್ವಂತ ಉದ್ಯೋಗದಲ್ಲಿರುವ ವ್ಯಕ್ತಿಯ ಸಂದರ್ಭದಲ್ಲಿ ಇತರರು ಅಂಥ ವ್ಯಕ್ತಿಗೆ ಕೊಡಬೇಕಾಗಿರುವ ಹಣವನ್ನು ಆತನ ಪತ್ನಿಗೆ ಕೊಡಬೇಕೆಂದು ನ್ಯಾಯಾಲಯ ಆದೇಶ ನೀಡುತ್ತದೆ.

## ಕುಟುಂಬ ನ್ಯಾಯಾಲಯ

ಕೇಂದ್ರ ಸರ್ಕಾರ ೧೯೮೪ರಲ್ಲಿ ಕುಟುಂಬ ನ್ಯಾಯಾಲಯಗಳ ಅಧಿನಿಯಮವನ್ನು ಜಾರಿ ಮಾಡಿತು. ಅದರಂತೆ ನಮ್ಮ ರಾಜ್ಯದಲ್ಲಿ ಬೆಂಗಳೂರಿನಲ್ಲಿ ಕುಟುಂಬ ನ್ಯಾಯಾಲಯವನ್ನು ಸ್ಥಾಪಿಸಲಾಗಿದೆ.

ಇದರ ಉದ್ದೇಶ ಕುಟುಂಬಕ್ಕೆ ಸಂಬಂಧಿಸಿದ ಎಲ್ಲ ವಿವಾದಗಳನ್ನು ಶೀಘ್ರವಾಗಿ ಪರಿಹರಿಸುವುದು. ಇತರ ನ್ಯಾಯಾಲಯಗಳಲ್ಲಿ ವಕೀಲರು ಮೊಕದ್ದಮೆಯನ್ನು ದೀರ್ಘಕಾಲ ಎಳೆದಾಡುವ ಸಾಧ್ಯತೆ ಇರುತ್ತದೆ. ಆದರೆ ಕುಟುಂಬ ನ್ಯಾಯಾಲಯಗಳಲ್ಲಿ ವಕೀಲರು ವಾದ ಮಾಡುವಂತಿಲ್ಲ. ವಾದ ವಿವಾದಗಳನ್ನು ಹಾಗೂ ವಿಚಾರಣೆಯನ್ನು ಪತಿ ಪತ್ನಿ ಇಚ್ಛಿಸಿದಲ್ಲಿ, ಗೌಪ್ಯವಾಗಿ ನಡೆಸಲಾಗುತ್ತದೆ. ವಿವಾದವನ್ನು ಪರಿಹರಿಸುವುದು ಇಂಥ ನ್ಯಾಯಾಲಯಗಳ ಮೂಲ ಉದ್ದೇಶ. ಇದಕ್ಕೆ ಈ ನ್ಯಾಯಾಲಯಗಳು ತಜ್ಞರ ಹಾಗೂ ಸಮಾಜ ಸೇವಕರ ಸಹಾಯವನ್ನು ಪಡೆಯಬಹುದಾಗಿದೆ. ಕುಟುಂಬ ನ್ಯಾಯಾಲಯ ಸದ್ಯಕ್ಕೆ ಬೆಂಗಳೂರಿನಲ್ಲಿ ಮಾತ್ರ ಸ್ಥಾಪಿತವಾಗಿದೆ.

ಬೆಂಗಳೂರು ಮಹಾನಗರ ಪ್ರದೇಶದ ವ್ಯಾಪ್ತಿಗೆ ಬರುವಂಥ ಕುಟುಂಬಕ್ಕೆ ಸಂಬಂಧಿಸಿದ ವ್ಯಾಜ್ಯದ ಸಂದರ್ಭದಲ್ಲಿ ಅರ್ಜಿಯನ್ನು ಬೆಂಗಳೂರಿನಲ್ಲಿರುವ ಕುಟುಂಬ ನ್ಯಾಯಾಲಯಕ್ಕೆ ಸಲ್ಲಿಸಬೇಕು. ಕುಟುಂಬ ನ್ಯಾಯಾಲಯ ಇಲ್ಲದಿರುವ ಸ್ಥಳಗಳಲ್ಲಿ ಅಂತಹ ಅರ್ಜಿಯನ್ನು ಸಿವಿಲ್ ನ್ಯಾಯಾಲಯದಲ್ಲಿ ಸಲ್ಲಿಸಬೇಕು.

ವಿವಾಹ ನೆರವೇರಿದ ಸ್ಥಳದ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸಿವಿಲ್ ನ್ಯಾಯಾಲಯ

**ಅಥವಾ**

ಪ್ರತಿವಾದಿ ವಾಸಿಸುತ್ತಿರುವ ಸ್ಥಳದ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸಿವಿಲ್ ನ್ಯಾಯಾಲಯ

**ಅಥವಾ**

ದಂಪತಿಗಳು ಕಡೆಯದಾಗಿ ಒಟ್ಟಿಗೆ ವಾಸಿಸುತ್ತಿದ್ದ ಸ್ಥಳದ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಸಿವಿಲ್ ನ್ಯಾಯಾಲಯ.

ಮೇಲಿನ ಯಾವುದೇ ನ್ಯಾಯಾಲಯದಲ್ಲಿ ಕೌಟುಂಬಿಕ ಸಮಸ್ಯೆಯ ಪರಿಹಾರಕ್ಕಾಗಿ ಅರ್ಜಿ ಸಲ್ಲಿಸಬಹುದಾಗಿದೆ.






ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**

ಕುಲಪತಿಗಳು